# ನೆಲ್ಸನ ಮಂಡೆಲಾ

ಲೇಃ ಜಿನ್ನಿ ಹಾಲಂಡ, ಚಿತ್ರಃ ಮಾಇಕ ವ್ಹಾಇಟ



# ನೆಲ್ಸನ ಮಂಡೆಲಾ

ಲೇಃ ಜಿನ್ನಿ ಹಾಲಂಡ, ಚಿತ್ರಃ ಮಾಇಕ ವ್ಹಾಇಟ

ಕನ್ನಡಕ್ಕೆಃ ಪ್ರಭಾಕರ ನಾನಾವಟಿ



1994 ರಲ್ಲಿ ನೆಲ್ಸನ ಮಂಡೆಲಾ ದಕ್ಷಿಣ ಆಫ್ರಿಕಾ ಈ ರಾಷ್ಟ್ರದ ರಾಷ್ಟ್ರಪತಿಯಾದರು. ಅವರು ತಮ್ಮ ದೇಶದ ಮತ್ತು ಅಲ್ಲಿಯ ಜನರ ಸ್ವಾತಂತ್ರ್ಯಕ್ಕಾಗಿ ಎಷ್ಟೋ ವರುಷ ಹೋರಾಡಿದರು. ಅವರ ತಂದೆ ಥೆಂಬು ಎಂಬ ಆದಿವಾಸಿ ಪಂಗಡದವರು. ಅವರ ಪೂರ್ವಜರು ಥೆಂಬು ಪಂಗಡದ ಅರಸರಾಗಿದ್ದರು. ಮಂಡೆಲಾ ಹುಟ್ಟುವ ಮೊದಲೇ ಶ್ವೇತ ವರ್ಣದ ದಕ್ಷಿಣ ಆಫ್ರಿಕನರು ಆದಿವಾಸಿ ಅರಸರನ್ನೆಲ್ಲ ತೆಗೆದೊಗೆದು ತಾವೇ ರಾಜ್ಯವಾಳುತ್ತಿದ್ದರು.



ಶ್ವೇತ ವರ್ಣದವರು ಎಲ್ಲ ಫಲವತ್ತಾದ ಭೂಮಿಗಳನ್ನು ತಮಗಾಗಿ ಇಟ್ಟುಕೊಂಡರು. ಇದರಿಂದಾಗಿ ಉಳಿದ ಆಫ್ರಿ ಕನರು ಕಡು ಬಡವರಾಗಿಯೇ ಉಳಿದರು. ಬಿಳಿ ಜನರೇ ಎಲ್ಲ ಕಾನೂನು – ನಿಯಮಗಳನ್ನು ಜಾರಿಗೊಳಿಸುತ್ತಿದ್ದರು. ಈ ಬಿಳಿಯರ ಕಾನೂನುಗಳಿಂದಾಗಿ ಕಪ್ಪು ವರ್ಣದ ಆಫ್ರಿಕನರಿಗೆ ಎರಡು ಹೊತ್ತಿನ ಊಟಕ್ಕೂ ಕೂಡ ಅಂಗಲಾಚಬೇಕಾಗುತ್ತಿತ್ತು. ಮಂಡೆಲಾ ಇವರಿಗೆ ದಕ್ಷಿಣ ಆಫ್ರಿಕೆಯನ್ನು ಬಿಳಿಯರ ದಬ್ಬಾಳಿಕೆಯಿಂದ ಮುಕ್ತಗೊಳಿಸಿ ಅದನ್ನು ಒಂದು ನ್ಯಾಯೋಚಿತ ದೇಶವೆಂದು ಬದಲಿಸಲು ಮೂವತ್ತು ವರುಷಗಳು ಹಿಡಿದವು.





ಚಿಕ್ಕಂದಿನಲ್ಲಿ ನೆಲ್ಸನ ಮಂಡೆಲಾ ಒಂದೇ ಕೋಣೆ ಇರುವ ದುಂಡಗಿನ ಗುಡಿಸಲಿನಲ್ಲಿ ರಾತ್ರಿ ಮಲಗುತ್ತಿದ್ದರು. ತಮ್ಮ ತಂದೆ ತಾಯಿ ಹಾಗು ಮೂರು ತಂಗಿಯರ ಜತೆ ಅವರು ಮಲಗುತ್ತಿದ್ದರು. ಪ್ರತಿಯೊಬ್ಬರಿಗೂ ಮಲಗಲಿಕ್ಕೆ ಬೇರೆ ಬೇರೆ ಚಾಪಿಗಳು ಇರುತ್ತಿದ್ದವು. ಅವರ ತಾಯಿಯ ಹತ್ತಿರ ತಲೆಮಾರಿನಿಂದ ಬಂದ ಮೂರು ಗುಡಿಸಲುಗಳು ಇದ್ದವು. ಒಂದು ಮಲಗಲಿಕ್ಕೆ, ಇನ್ನೊಂದು ಅಡಿಗೆ ಮಾಡಲಿಕ್ಕೆ ಮತ್ತೊಂದು ಧಾನ್ಯಗಳನ್ನು ಇಡಲಿಕ್ಕೆ. ಉಳಿದ ಆದಿವಾಸಿ ಹೆಂಗಳೆಯರಂತೆ ತಾಯಿಯ ಹತ್ತಿರ ದನಗಳನ್ನು ಕಟ್ಟಲಿಕ್ಕೆ ಕೊಟ್ಟಿಗೆ ಇತ್ತು. ಅದರಲ್ಲಿ ಹಾಲು ಕೊಡುವ ಆಕಳುಗಳನ್ನು ಕಟ್ಟುತ್ತಿದ್ದರು. ಗುಡಿಸಲಿನ ಸುತ್ತಮುತ್ತಲು ಅವರು ಕಾಯಿಪಲ್ಲೆಗಳನ್ನು ಕೂಡ ಬೆಳೆಸುತ್ತಿದ್ದರು.

ಅವರ ಜನಾಂಗದ ಮುಖ್ಯ ಆಹಾರ  ಒಂದು ತರಹದ ಗೋವಿನ ಜೋಳ. ನೆಲ್ಸನನ ತಾಯಿ ಜೋಳವನ್ನು ಬೀಸಿ ಹಿಟ್ಟು ಮಾಡುತ್ತಿದ್ದಳು. ಆಮೇಲೆ ಒಲೆಯಲ್ಲಿಟ್ಟು ಜೋಳದ ರೊಟ್ಟಿ ಮಾಡುತ್ತಿದ್ದಳು.  ಜೋಳವನ್ನು ಬೀಸಲು ತಂಗೆಂದಿರು ತಾಯಿಗೆ ಸಹಾಯ ಮಾಡುತ್ತಿದ್ದರು.  ನೆಲ್ಸನ ಮನೆಯಲ್ಲಿಯ ದನಕರುಗಳನ್ನು ಮೇಯಲಿಕ್ಕೆ ಅಡವಿಗೆ ಒಯ್ಯುತ್ತಿದ್ದನು.





ಯಾವಾಗಾದರೊಮ್ಮೆ ನೆಲ್ಸನ ತನ್ನ ಸಂಗಡಿಗರ ಜತೆ ಬೇಟೆಯಾಡಲು ಹೋಗುತ್ತಿದ್ದನು. ಹಕ್ಕಿಗಳ ಬೇಟೆ ಆಡಿದಾಗ ಆದರ ರೆಕ್ಕೆಗಳನ್ನು ಬೇಯಿಸಿ ಅವರೆಲ್ಲರು ಕೂಡಿ ತಿನ್ನುತ್ತಿದ್ದರು. ನೆಲ್ಸನ ಒಂದು ರೀತಿಯ ಸಮಾಧಾನದ ಆಯುಷ್ಯವನ್ನು ಕಳೆಯುತ್ತಿದ್ದನು. ಅವನು ಹತ್ತು ವರುಷದವನಿದ್ದಾಗ ಅವನ ತಂದೆ ಅಕಸ್ಮಾತ್ತಾಗಿ ತೀರಿಕೊಂಡರು.

ಇದರ ನಂತರ ನೆಲ್ಸನ ತನ್ನ ಕಕ್ಕನ ಮಗನಾದ ಜೋಂಗಿಂತಾಬಾ ಎಂಬ ಮುಖ್ಯಸ್ಥನ ಕುಟುಂಬದ ಜತೆ ಇರತೊಡಗಿದನು. ಮುಖ್ಯಸ್ಥನು ಇವನ ಕಾಳಜಿ ತೆಗೆದುಕೊಳ್ಳುವ ಮತ್ತು ಇವನನ್ನು ಶಾಲೆಗೆ ಕಳಿಸುವ ಆಶ್ವಾಸನೆ ಕೊಟ್ಟನು.

ಆದರೆ ನೆಲ್ಸನನು ಎಲ್ಲಕ್ಕಿಂತ ಹಿರಿದಾದ ಪಾಠವನ್ನು ಶಾಲೆಯಲ್ಲಿ ಕಲಿಯಲಿಲ್ಲ. ಆ ದಿನಗಳಲ್ಲಿ ತರುಣರೆಲ್ಲ ಹಿರಿಯರ ಮಾತುಗಳನ್ನು ಚಿತ್ತಗೊಟ್ಟು ಆಲಿಸುತ್ತಿದ್ದರು. ಥೆಂಬು ರಾಜ್ಯದ ಸಾಕಷ್ಟು ಜನರು ಜೋಗಿಂತಾಬಾನನ್ನು ಭೆಟ್ಟಿಯಾಗಲು ಬರುತ್ತಿದ್ದರು.





ಆ ಜನರಲ್ಲಿ ಜ್ವಲಿಭಾಂಗಿಲೆ ಜೋಯಿ ಎಂಬ ಮುಖ್ಯಸ್ಥನು ಕೂಡ ಇರುತ್ತಿದ್ದನು. ಅವನೇ ಜೋಂಗಿಂತಾಬಾನಿಗೆ ಥೆಂಬು ಅರಸರ ಕಾಳಗದ ಕತೆ ಮತ್ತು ಬ್ರಿಟಿಶರ ಜತೆಗಿನ ಹೋರಾಟದ ಕತೆಗಳನ್ನು ಹೇಳುತ್ತಿದ್ದನು. ನೆಲ್ಸನ ಈ ಮಾತುಗಳನ್ನು ಕಿವಿಗೊಟ್ಟು ಆಲಿಸುತ್ತಿದ್ದನು. ಥೆಂಬು ಜನರ ಹತ್ತಿರ ಸಾಗುವಳಿಯ ಭೂಮಿ ಏಕಿಲ್ಲ ಎಂಬುದರ ರಹಸ್ಯ ಅವನಿಗೆ ತಿಳಿಯತೊಡಗಿತು. ಈಗಿದ್ದಷ್ಟು ಬಡತನ ಈ ಮೊದಲು ಎಂದೂ ಇರಲಿಲ್ಲ, ಈ ಎಲ್ಲರ ಜೀವನ ಸುಧಾರಿಸಲು ಸಾಕಷ್ಟು ಪರಿಶ್ರಮ ಮಾಡಬೇಕಾಗಬಹುದು ಎಂಬುದರ ಅರಿವು ಅವನಿಗಾಯಿತು.



1941ರಲ್ಲಿ ನೆಲ್ಸನ ಜೋಹಾನ್ಸಬರ್ಗ ತಲುಪಿದನು. ಅದು ದಕ್ಷಿಣ ಆಫ್ರಿಕದ ದೊಡ್ಡ ನಗರ. ಅಲ್ಲಿಯ ಚಿನ್ನದ ಗಣಿಯಲ್ಲಿ ಪೋಲಿಸ ಚಾಕರಿ ಅವನಿಗೆ ದೊರೆಯಿತು. ಈ ಮೊದಲು ಅವನು ಎಂದಿಗೂ ತನ್ನ ಪಂಗಡ ಬಿಟ್ಟು ಹೊರಗೆ ಇದ್ದ ಅನುಭವ ಅವನಿಗೆ ಇರಲಿಲ್ಲ. ಬಿಳಿಯರ ಕಾನೂನಿನಂತೆ ಬೇರೆ ಬೇರೆ ಜನಾಂಗಗಳು ಅವರಿಗಾಗಿ ಮೀಸಲಿಟ್ಟ ಬೇರೆ ಬೇರೆ ವಸತಿಸ್ಥಾನಗಳಲ್ಲಿ ಇರಬೇಕಾಗುತ್ತಿತ್ತು. ಬಿಳಿಯರು ವರ್ಣಭೇದಕ್ಕೆ ಪುಟಗೊಡುತ್ತಿದ್ದರು. ನಗರಗಳಲ್ಲಿ ಶ್ವೇತ ವರ್ಣದವರು ದೊಡ್ಡ ದೊಡ್ಡ ಮನೆಗಳಲ್ಲಿ ಬಿಳಿಯರಿಗಾಗಿಯೇ ಇರುವ ಓಣಿಗಳಲ್ಲಿ ಇರುತ್ತಿದ್ದರು. ಅವರ ಮನೆಗೆಲಸಕ್ಕಾಗಿ ಕಪ್ಪು ವರ್ಣದ ಆಫ್ರಿಕನರೇ ದುಡಿಯುತ್ತಿದ್ದರು.



ಕಪ್ಪು ವರ್ಣದ ಜನರಿಗೆ ನಗರಗಳಲ್ಲಿ ಕೆಲಸ ಮಾಡಲು ವಿಶೇಷ ಅನುಮತಿ ತೆಗೆದುಕೊಳ್ಳಬೇಕಾಗುತ್ತಿತ್ತು. ಕಪ್ಪು ಜನರಿಗಾಗಿಯೇ ವಸತಿ ಬೇರೆ ಇರುತ್ತಿತ್ತು. ಅವರಿರುವ ವಸತಿಯ ಸುತ್ತಲು ಯಾವ ಕಾಯಿಪಲ್ಲೆಗಳು ಬೆಳೆಯುತ್ತಿರಲಿಲ್ಲ. ಕೊಳಚೆಯ ಸರಿ, ಹಾಳುಬಿದ್ದ ಬಂಜರು ಭೂಮಿಯು ಅವರ ಪಾಲಿಗೆ ಇಡಲಾಗಿತ್ತು. ತಿನ್ನುವಂತಹ ಯಾವದೇ ಪದಾರ್ಥಗಳು ಅಲ್ಲಿ ಬೆಳೆಯುತ್ತಿರಲಿಲ್ಲ. ಇವರ ವಸತಿಗಳಲ್ಲಿ, ನೀರು, ವಿದ್ಯುತ್ತು ಮತ್ತು ಟೇಲಿಫೋನಿನಂತಹ ಸೌಕರ್ಯಗಳು ಇರಲಿಲ್ಲ. ಕಪ್ಪು ವರ್ಣದ ಜನರಿಗೆ ಮತ ಹಾಕುವ ಮತ್ತು ಭೂಮಿಯನ್ನು ಕೊಂಡುಕೊಳ್ಳುವ ಅಧಿಕಾರಗಳು ಇರಲಿಲ್ಲ. ಬಿಳಿ ವರ್ಣದ ಜನರು ತಮ್ಮಹಿತ ಮತ್ತು ಸುರಕ್ಷೆಗಾಗಿ ಇಂತಹ ಅಹಿತಕರವಾದ ಕಾನೂನುಗಳನ್ನು ಮಾಡಿದ್ದರು. ಹೀಗಾಗಿ ದಕ್ಷಿಣ ಆಫ್ರಿಕಾದಲ್ಲಿ ಪ್ರತಿ ಆರೇಳು ಕಪ್ಪು ಜನರ ಹಿಂದೆ ಒಬ್ಬ ಬಿಳಿ ವರ್ಣದವ ಇರುತ್ತಿದ್ದನು.

ಪಟ್ಟಣಗಳ ಹೊರಗೆ ದೂರದಲ್ಲಿ ಕೆಲಸಕ್ಕಿರುವ ಕಪ್ಪು ಕೂಲಿಕಾರರ ಸ್ಥಿತಿ ಮತ್ತಷ್ಟು ಬಿಕ್ಕಟ್ಟಾಗಿರುತ್ತಿತ್ತು. ಕೂಲಿ ಮಾಡಲು ಪರ್ಮಿಟ್ಟು ಇದ್ದವರು ನಸುಕಿನಲ್ಲಿಯೇ ಪಟ್ಟಣ ಬಿಡಬೇಕಾಗುತ್ತಿತ್ತು. ಟ್ರೇನ ಮತ್ತು ಬಸ್ಸುಗಳಲ್ಲಿ ಜೋತು ಬಿದ್ದು ಪ್ರವಾಸ ಮಾಡಿ ಮನೆಗೆ ತೆರಳಬೇಕಾಗುತ್ತಿತ್ತು. ಮತ್ತೇ ಮರುದಿನ ಮುಂಜಾನೆ ಕೆಲಸಕ್ಕೆ ಹೋಗಬೇಕಾಗುತ್ತಿತ್ತು. ಕೈಗೆ ಸಿಗುವ ಕೂಲಿ ಬಹಳ ಕಡಿಮೆ. ಅದರಲ್ಲಿ ಎರಡು ಹೊತ್ತಿನ ಹೊಟ್ಟೆತುಂಬ ಊಟ ಕೂಡ ದೊರೆಯುತ್ತಿರಲಿಲ್ಲ.



ಕೆಲ ದಿನಗಳಾದ ಮೇಲೆ ನೆಲ್ಸನ ಮಂಡೆಲಾ ವಿಟವಾಟರ್ಸ್ಯಾಂ ಡ ವಿಶ್ವವಿದ್ಯಾಲಯದಲ್ಲಿ ಮುಂದಿನ ಶಿಕ್ಷಣಕ್ಕಾಗಿ ಹೋದರು. ಅಲ್ಲಿ ಯಾವ ಭೇದಭಾವಿಲ್ಲದೆ ಎಲ್ಲ ಜನಜಾತಿ ಮತ್ತು ವರ್ಣದ ವಿದ್ಯಾರ್ಥಿಗಳು  ಕೂಡಿ ಕಲಿಯುತ್ತಿದ್ದದ್ದನ್ನು ಅವರು ಗಮನಿಸಿದರು. ಅಲ್ಲಿಯ ವಿದ್ಯಾರ್ಥಿಗಳು ದಕ್ಷಿಣ ಆಫ್ರಿಕೆಯ ಶಾಸನವನ್ನು  ಹೊಸ ರೀತಿಯಿಂದ ಹೇಗೆ ಆಳಬಹುದು ಎಂಬುದರ ಚರ್ಚೆ ಮಾಡುತ್ತಿದ್ದರು.  ಹೆಚ್ಚಾನುಹೆಚ್ಚು ಬಿಳಿಯರು ಶ್ವೇತವರ್ಣದವರೇ ಒಳ್ಳೆಯ ಆಢಳಿತಗಾರರು ಎಂದು ವಾದಿಸುತ್ತಿದ್ದರು. ಆದರೆ ಉಳಿದ ಎಲ್ಲ ವಿದ್ಯಾರ್ಥಿಗಳು ದಕ್ಷಿಣ ಆಫ್ರಿಕೆಯಲ್ಲಿರುವ ಎಲ್ಲ ವರ್ಣದ, ಭಾಷೆಯ ಮತ್ತು ಜನಜಾತಿಯರಿಗೆ ಸಮಾನ ಅಧಿಕಾರವಿರಬೇಕೆಂದು ವಾದಿಸುತ್ತಿದ್ದರು.

ದಕ್ಷಿಣ ಆಫ್ರಿಕದ ಜನರಿಗೆ ನ್ಯಾಯ ಕೊಡುವದಕ್ಕಾಗಿ ಇಡೀ ಆಯುಷ್ಯವನ್ನೇ ಕೊಡುತ್ತೇನೆ ಎಂದು ಅವರು ಆಗ ಪಣ ತೊಟ್ಟರು.

1944 ರಲ್ಲಿ ತಮ್ಮ ವಯಸ್ಸಿನ 26 ವರುಷವಿದ್ದಾಗ ಆಫ್ರಿಕನ ನ್ಯಾಶನಲ್ ಕಾಂಗ್ರೆಸ ಎಂಬ ಸಂಘಟನೆಯನ್ನು ಅವರು ಸೇರಿದರು. ಅದೇ ಕಾಲದಲ್ಲಿ ಇವ್ವೆಲಿನ ಎಂಬ ಮೊದಲನೆ ಪತ್ನಿಯ ಜತೆ ಅವರ ವಿವಾಹವಾಯಿತು.



1947 ರಲ್ಲಿ ಯುಥ ಲೀಗದ ಸಚಿವರೆಂದು ಅವರ ಆಯ್ಕೆಯಾಯಿತು.
1951 ರಲ್ಲಿ  ANCಯ ಮುಷ್ಕರದ ನೇತೃತ್ವವನ್ನು ಅವರು ಮಾಡಿದರು.   ಬಿಳಿಯರ ಅನ್ಯಾಯಕ್ಕೆ ತುತ್ತಾದ  ಆಫ್ರಿಕಾ ಮತ್ತು ಭಾರತದ ಮೂಲ ವಂಶದ ಜನರೆಲ್ಲ ಕೆಲಸ ಮಾಡಲು ಅಲ್ಲಗಳೆದರು.



1951ರಲ್ಲಿ ಮಂಡೆಲಾ  ANC ಯ ಯುಥ ಲೀಗದ ಅಧ್ಯಕ್ಷರಾದರು. ಅನ್ಯಾಯಪೂರ್ಣ ಕಾನೂನುಗಳ ವಿರುದ್ಧದಲ್ಲಿ ಧ್ವನಿ ಎತ್ತಿದ್ದಕ್ಕೆ ಮತ್ತು ಪ್ರತಿಭಟನೆಗಾಗಿ ಕೂಳಿತಿದ್ದಕ್ಕೆ ಮಂಡೆಲಾ ಸಹಿತ 20 ಕಾರ್ಯಕರ್ತರನ್ನು ಪೋಲೀಸರು ಬಂಧಿಸಿದರು. ಆದರೆ ಅವರು ಯಾವದೇ ಹಿಂಸೆ ಮಾಡಿಲ್ಲವೆಂದು ಪೋಲೀಸರಿಗೆ ಅವರ ಬಿಡುಗಡೆ ಮಾಡಬೇಕಾಯಿತು.

ಇದಾದನಂತರ ಸಾಮಾನ್ಯ ಜನರೆಲ್ಲ ಬಿಳಿಯರ ಪಕ್ಷಪಾತದ ಕಾನೂನುಗಳನ್ನೆಲ್ಲ ವಿರೋಧಿಸತೊಡಗಿದರು. ಇಂತಹ ಪ್ರಸಂಗಗಳಲ್ಲಿ ಬಿಳಿಯ ಮತ್ತು ಕಪ್ಪು ಜನರು ಗಾಯಗೊಳ್ಳುತ್ತಿದ್ದರು. ಇದರಿಂದಾಗಿ ಮಂಡೆಲಾರ ಬಾಯಿಯನ್ನೇ ಮುಚ್ಚುವ ಸಂಚ ಸರಕಾರ ಹಾಕಿತು. ಆದ್ದರಿಂದ ಮಂಡೆಲಾ ಮತ್ತು ANC ಹೋರಾಟದಲ್ಲಿ ಸೋತರು ಎಂದು ಅನ್ನಿಸತೊಡಗಿತು.

ಆದರೆ ಮಂಡೆಲಾ ತಮ್ಮ ಸಂಘರ್ಷವನ್ನು ಮುಂದುಗೊಳಿಸಿದರು. ಸರಿಸಮ ಹಕ್ಕುಗಳಿಗಾಗಿ ಆಂದೋಲನೆ ಮಾಡಿದಾಗ ಅವರನ್ನು ಎರಡನೆ ಸಲ ಕೈದು ಮಾಡಲಾಯಿತು. 1956ರಲ್ಲಿ 156 ಜನರ ಮೇಲೆ ರಾಜದ್ರೋಹದ ಆರೋಪವನ್ನು ಹೊರಿಸಲಾಯಿತು. ರಾಜದ್ರೋಹವೆಂದರೆ ಶಾಸನವನ್ನು ಉರುಳಿಸುವ ಮತ್ತು ಶಾಸನದ ವಿರೋಧದಲ್ಲಿ ನಡೆಸಿದ ಹೋರಾಟ. ಮಂಡೆಲಾ ಸಹಿತ 29 ಕಾರ್ಯಕರ್ತರ ಮೇಲೆ ಮೃತ್ಯುದಂಡನೆಯ ಶಿಕ್ಷೆಯನ್ನು ವಿಧಿಸಲಾಯಿತು. ಆದರೆ ನ್ಯಾಯಧೀಶರು ಇವರನ್ನು ನಿರ್ದೋಷರೆಂದು ಘೋಷಿಸಿದರು. ಹಾಗು 156 ಜನರನ್ನೆಲ್ಲ ಬಿಡುಗಡೆ ಮಾಡಿದರು.





ನೆಲ್ಸನ ಮತ್ತು ಇವ್ಲೆಲಿನ ಇವರ ವಿವಾಹ ಸರಿಹೊಂದಲಿಲ್ಲ. 1958ರಲ್ಲಿ ವಿನ್ನಿ ಮದಿಕಿಜೆಲಾ ಜತೆ ಅವರ ಮರುವಿವಾಹ-ವಾಯಿತು. ವಿನ್ನಿ ದಕ್ಷಿಣ ಆಫ್ರಿಕೆಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೆಲ್ಸನ ಜತೆ ಹೆಗಲಿಗೆ ಹೆಗಲು ಕೊಟ್ಟು ಹೋರಾಡಿದಳು.



1960ರಲ್ಲಿ ಒಂದು ಭಯಂಕರವಾದ ಘಟನೆ ಘಟಿಸಿತು. ಶಾರ್ಪ್‌ವಿಲ್ಲೆ ನಗರದಲ್ಲಿಯ ಜನ ಅನ್ಯಾಯಕರ ಕಾನೂನಿನ ವಿರುದ್ಧ ಶಾಂತತಾಪೂರ್ಣ ಪ್ರತಿಭಟನೆ ನಡೆಸುತ್ತಿದ್ದಾಗ ಪೋಲಿಸ ಪಡೆ ಅವರ ಮೇಲೆ ಗುಂಡುಗಳನ್ನು ಹಾರಿಸತೊಡಗಿತು. ಇದರಲ್ಲಿ 69 ಜನರು ಹುತಾತ್ಮರಾಗಿ ಅಸುನೀಗಿದರು. 180 ಕ್ಕಿಂತ ಹೆಚ್ಚು ಮಕ್ಕಳು ಮತ್ತು ಮಹಿಳೆಯರು ಗಾಯಗೊಂಡರು.

ಇದಾದನಂತರ ದಕ್ಷಿಣ ಆಫ್ರಿಕೆಯ ಶಾಸನ ANC ಮೇಲೆ ನಿಷೇಧಾಜ್ಞೆ ಹೊರಡಿಸಿತು. ANC ಸದಸ್ಯನಾಗುವದು ಕಾನೂನುವಿರೋಧವೆಂದು ಆಜ್ಞೆ ಹೊರಡಿಸಿತು. ನೆಲ್ಸನ ಮಂಡೆಲಾರನ್ನು ಜೈಲಿಗೆ ಅಟ್ಟಿದರು. ನೆಲ್ಸನ ಮಂಡೆಲಾ ಶಾರ್ಪವ್ಹಿಲ್ಲೆ ಆಂದೋಲನೆಗೆ ಬೆಂಬಲ ಕೊಟ್ಟಿದ್ದಕ್ಕೆ ಅವರು ಜೈಲಿನಲ್ಲಿದ್ದಾಗಲೇ ಶಿಕ್ಷೆ ವಿಧಿಸಿತು. ಮಂಡೆಲಾ ಜೈಲಿನಂದ ಹೊರಬಂದಮೇಲೆ ತಮ್ಮ ಸಂಗಡಿಗರ ಜತೆ ಕೂಡಿಕೊಂಡು ಒಂದು ಹೊಸ ಸಂಘಟನೆಯನ್ನು ಕಟ್ಟಿದರು. ಅದು ಸರಕಾರದ ವರ್ಣಭೇದದ ನೀತಿಯನ್ನು ಪ್ರತಿಭಟಿಸಿ ಸರಕಾರಿ ಕಟ್ಟಡಗಳನ್ನು ನಷ್ಟಗೊಳಿಸ ತೊಡಗಿತು. ಅದರಲ್ಲಿ ಯಾರೂ ಮೃತರಾಗಲಾರರು ಎಂಬುದರ ಬಗ್ಗೆ ವಿಶೇಷ ಕಾಳಜಿ ತೆಗೆದುಕೊಳ್ಳಲಾಯಿತು. ಈಗ ಇವರ ಆಂದೋಲನೆ ಶಾಂತಿಪೂರ್ಣವಾಗಿಲ್ಲ.



ಮಂಡೆಲಾ ಪೋಲಿಸರ ಕೈಯಿಂದ ತಪ್ಪಿಸಿಕೊಳ್ಳುತ್ತ ದಿನ ಕಳೆಯುತ್ತಿದ್ದರು. ಬೇರೆ ಉಡುಪನ್ನು ಧರಿಸಿ ಟ್ಯಾಕ್ಸಿ ಓಡಿಸುತ್ತಿದ್ದರು. 1962ರಲ್ಲಿ ಮತ್ತೊಮ್ಮೆ ಅವರನ್ನು ಬಂಧಿಸಲಾಯಿತು. ಈ ಸಲ ಅವರನ್ನು ಪ್ರಿಟೋರಿಯಾದ ಜೈಲಿನಲ್ಲಿಡಲಾಯಿತು. ಮತ್ತು ಅವರಿಗೆ ಐದು ವರುಷದ ಕಠಿಣವಾದ ಶಿಕ್ಷೆ ವಿಧಿಸಲಾಯಿತ್ತು. ಈ ಜೈಲಿನಲ್ಲಿದ್ದಾಗ ಮತ್ತೊಮ್ಮೆ ಕೋರ್ಟು-ಕಚೇರಿಗೆ ಒಯ್ದು ಜೀವಾವಧಿ ದಂಡನೆಯ ಶಿಕ್ಷೆ ವಿಧಿಸಲಾಯಿತು.





13 ಜೂನ 1964 ರಂದು ಮಂಡೆಲಾ ಇವರನ್ನು ರೋಬ್ಬೆನ ಆಯಲ್ಯಾಂಡದ ಜೇಲಿನಲ್ಲಿ ಇಡಲಾಯಿತು. ಅಲ್ಲಿಯ ಪೋಲಿಸರು ಅವರನ್ನು ಒಂದು ಸ್ವತಂತ್ರವಾದ ಕೋಣೆಯಲ್ಲಿ ಬಂಧಿಸಿ ಇಟ್ಟರು. ರಾಜಕೀಯ ಕೈದಿಗಳಂತೆ ಇಡೀ ದಿವಸ ಮತ್ತು ರಾತ್ರಿ ಬಾಗಿಲು ಮುಚ್ಚಿದ ಕೋಣೆಯಲ್ಲಿಯೇ ಒಬ್ಬರೇ ಇರುವ ಶಿಕ್ಷೆ ಅವರಿಗೆ ಕೊಡಲಾಯಿತು. ಆನಂತರ ಆವರಿಗೆ ಹೊರಬಿದ್ದು ತಿರುಗಾಡಲು ಅನುಮತಿ ಕೊಡಲಾಯಿತು. ಹೊರಬಿದ್ದಾಗ ಅಂಚೆಯ ದಪ್ಪಚೀಲಗಳನ್ನು ಹೊಲಿಯುವ ಕೆಲಸ ಅವರಿಗೆ ಕೊಡಲಾಯಿತು. ಮಗ್ಗಲಿನ ಕೈದಿಯ ಜತೆ ಮಾತಾಡಿದರೆ ಆದಿನದ ಊಟ ಅವರಿಗೆ ದೊರೆಯುತ್ತಿರಲಿಲ್ಲ.

ನೆಲ್ಸನ ಮಂಡೆಲಾ ಸೆರೆಮನೆಯಲ್ಲಿದ್ದಾಗ ದಕ್ಷಿಣ ಆಫ್ರಿಕನರು ವರ್ಣಭೇದದ ವಿರೋಧದಲ್ಲಿ ಮುಷ್ಕರ, ಪ್ರತಿಭಟನೆ ಹೋರಾಟಕ್ಕಾಗಿ ಇಳಿದವರಲ್ಲಿಯ ಸಾಕಷ್ಟು ಜನರ ಜೀವ ಹೋಯಿತು. ಉಳಿದವರನ್ನು ಜೈಲಿಗೆ ರವಾನಿಸಲಾಯಿತು. ಇಡೀ ಜಗತ್ತೇ ಮಂಡೆಲಾರನ್ನು ಬಂಧನದಲ್ಲಿ ಇಟ್ಟಿದ್ದಕ್ಕೆ ಸಂತಾಪ ವ್ಯಕ್ತಗೊಳಿಸುತ್ತಿತ್ತು. ಸಾಕಷ್ಟು ರಾಷ್ಟ್ರಗಳು ಮಂಡೆಲಾರ ಬಿಡುಗಡೆಗೆ ಪ್ರಯತ್ನ ಮಾಡಿದವು. ಅವರಿಗೆ ದಕ್ಷಿಣ ಆಫ್ರಿಕಯನ್ನು ವರ್ಣಭೇದದ ಶಾಪದಿಂದ ಮುಕ್ತಗೊಳಿಸಬೇಕಾಗಿತ್ತು. ಆದ್ದರಿಂದ ಪ್ರಗತಿಶೀಲ ದೇಶಗಳು ದಕ್ಷಿಣ ಆಫ್ರಿಕೆಯ ಸರಕಾರಕ್ಕೆ ತಮ್ಮ ನೀತಿಯನ್ನು ಬದಲಿಸಲು ಒತ್ತಾಯ ಪಡಿಸುತ್ತಿದ್ದವು.






ದಕ್ಷಿಣ ಆಫ್ರಿಕಾಕ್ಕೆ ಆಲಿಂಪಿಕ್ ವಿಶ್ವ ಕ್ರೀಡಾ ಪಂದ್ಯಗಳಲ್ಲಿ ಭಾಗ ತೆಗೆದುಕೊಳ್ಳಲು ಅಡ್ಡಿ ಮಾಡಲಾಯಿತು. 1986ರಲ್ಲಿ ಅಮೇರಿಕಾ ಸರಕಾರವು ಒಂದು ಕಾನೂನು ಮಾಡಿ ದಕ್ಷಿಣ ಆಫ್ರಿಕೆಯ ವಿಮಾನ ಮತ್ತು ಹಡಗುಗಳನ್ನು ಅಮೇರಿಕೆಯ ಭೂಭಾಗದ ಮೇಲೆ ಬರಲು ಅನುಮತಿ ಕೊಡಲಿಲ್ಲ. ಇದೇ ಕಾನೂನು ಮೇರೆಗೆ ದಕ್ಷಿಣ ಆಫ್ರಿಕೆಯ ಜತೆಗಿನ ತನ್ನ ಎಲ್ಲ ವ್ಯಾಪಾರ ಸಂಬಂಧವನ್ನು ಅಮೇರಿಕಾ ಕೊನೆಗೊಳಿಸಿತು.

ಮಂಡೆಲಾ ಇವರ 70ನೇ ಹುಟ್ಟುಹಬ್ಬದ ದಿನ ಒಂದು ಭವ್ಯವಾದ ಸಂಗೀತ ಕಾರ್ಯಕ್ರಮವನ್ನು ಏರ್ಪಡಿಸಲಾಯಿತು. ಜಗತ್ತಿನ ಎಲ್ಲ ಟಿವ್ಹಿಗಳ ಮೇಲೆ ಈ ಕಾರ್ಯಕ್ರಮವನ್ನು ತೋರಿಸಲಾಯಿತು. ಆಗ ದಕ್ಷಿಣ ಆಫ್ರಿಕೆಯ ಸರಕಾರಕ್ಕೆ ಇಡೀ ಜಗತ್ತಿನ ಎಲ್ಲ ಸಮುದಾಯದ ಮತವನ್ನು ಅಲ್ಲಗಳೆಯಲು ಶಕ್ಯವಾಗಲಿಲ್ಲ.



1989ರಲ್ಲಿ ಎಫ.ಈ.ಡಬ್ಲ್ಯೂ. ಡಿಕ್ಲಾರ್ಕ ಇವರು ದಕ್ಷಿಣ ಆಫ್ರಿಕೆಯ ರಾಷ್ಟ್ರಪತಿಗಳೆಂದು ಆಯ್ಕೆಗೊಂಡರು. ಅವರು ದೇಶದಲ್ಲಿಯ ಎಲ್ಲ ಜನರಿಗಾಗಿ ದಕ್ಷಿಣ ಆಫ್ರಿಕೆ ಒಂದು ಒಳ್ಳೆಯ ದೇಶವಾಗಬೇಕೆಂದು ಪ್ರಯತ್ನಿಸತೊಡಗಿದರು. ಒಂದು ದಿನ ಮಂಡೆಲಾರನ್ನು ಸೆರೆಮನೆಯಿಂದ ಬಿಡುಗಡೆ ಮಾಡುವ ಬಗ್ಗೆ ಘೋಷಣೆಯನ್ನು ಮಾಡಿದರು.

11 ಫೆಬ್ರುವರಿ 1990ರಂದು ನೆಲ್ಸನ ಮಂಡೆಲಾ ಜೇಲಿನಿಂದ ಹೊರಬಂದರು. ಆಗ ಅವರು 71 ವರುಷದವರಿದ್ದರು. ಅವರು 10000 ದಿನ ಜೇಲಿನಲ್ಲಿ ಕಳೆದಿದ್ದರು.



ಸೆರೆಮನೆಯ ಹೊರಗೆ ಮಂಡೆಲಾ ಇವರು ತಮ್ಮ ಪತ್ನಿ ವಿನ್ನಿಯನ್ನು ಭೆಟ್ಟಿಯಾದರು. ಮಂಡೆಲಾರ ಮುಂದಿನ ಪ್ರವಾಸದಲ್ಲಿ ವಿನ್ನಿ ಅವರ ಜತೆ ಇರುತ್ತಿದ್ದಳು. ಇಡೀ ಜಗತ್ತಿಗೇನೇ ಮಂಡೆಲಾರ  ಜೇಲಿನಿಂದಾದ ಬಿಡುಗಡೆಗೆ ಸಂತಸ ವಾಯಿತು. ಮಂಡೆಲಾರ ಬಿಡುಗಡೆ ಎಂದರೆ ದಕ್ಷಿಣ ಆಫ್ರಿಕೆ ತನ್ನ ಅನ್ಯಾಯಕರವಾದ ವರ್ಣಭೇದದ ನೀತಿಯನ್ನು ಬಿಟ್ಟು ಬಿಡುವದರ ಕುರುಹು.  ಮಂಡೆಲಾರ ಬಿಡುಗಡೆಯ ದಿನ ಎಲ್ಲ ಆಫ್ರಿಕನರು ಹೊರದಾರಿಯ ಮೇಲೆ ಬಂದು ಕುಣಿದಾಡತೊಡಗಿದರು.

ಎಫ.ಈ.ಡಬ್ಲ್ಯು. ಡಿಕ್ಲಾರ್ಕ ಇವರು ಮಂಡೆಲಾ ಮತ್ತು ANC ಜತೆ ಕೆಲಸ ಮಾಡಿದರು. ಇಬ್ಬರು ಕೂಡಿಯೇ ಹೊಸ ಶಾಸನಕ್ಕಾಗಿ ಮುಕ್ತ ಚುನಾವಣೆಯ ವ್ಯವಸ್ಥೆ ಮಾಡಿದರು. 1994ರಲ್ಲಿ ಮಂಡೆಲಾ ರಾಷ್ಟ್ರಪತಿ ಚುನಾವಣೆಗೆ ನಿಂತರು. ಅವರಿಗೆ ಓಟು ಕೊಡಲು ಲಕ್ಷಾನುಗಟ್ಟಲೆ ಕಪ್ಪು ವರ್ಣದ ಜನರು, ತಾಸುಗಟ್ಟಲೆ ಬಿಸಿಲಿನಲ್ಲಿ ನಿಂತರು. ಮಂಡೆಲಾ ಚುನಾವಣೆ ಗೆದ್ದು ರಾಷ್ಟ್ರಪತಿಯಾದರು. ಎಫ.ಈ.ಡಬ್ಲ್ಯು. ಡಿಕ್ಲಾರ್ಕ ಉಪರಾಷ್ಟ್ರಪತಿಯಾದರು.





ರಾಷ್ಟ್ರಪತಿ ಮಂಡೆಲಾ ಜಗತ್ತಿನ ಪ್ರವಾಸ ಕೈಗೊಂಡು ಅಮೇರಿಕಾದ ರಾಷ್ಟ್ರಾಧ್ಯಕ್ಷ ಕ್ಲಿಂಟನರನ್ನು ಭೆಟ್ಟಿಯಾದರು. ಅವರು ವರ್ಣಭೇದ ಮಾಡದೆ ಬಿಳಿ ಮತ್ತು ಕಪ್ಪು ವರ್ಣದ ಜನರಿಗೆ ಸರಿಸಮ ಸಂಧಿ ಕೊಟ್ಟರು. ಶಾಂತಿಯಿಂದ ತಮ್ಮ ಕೆಲಸ ಮಾಡುತ್ತಿದ್ದರು. ದಕ್ಷಿಣ ಆಫ್ರಿಕದ ನಾಗರಿಕರ ಜೀವನ ಸುಖಕರವಾಗಲು ಪ್ರಯತ್ನಿಸುತ್ತಿದ್ದರು. ಎಲ್ಲರಿಗೂ ಓಟು ಕೊಡುವ ಅಧಿಕಾರ ಕೊಟ್ಟರು. ಎಲ್ಲ ನಾಗರಿಕರಿಗೆ ಎಲ್ಲಿ ಬೇಕಾದಲ್ಲಿ ಪ್ರವಾಸ ಮಾಡುವ, ಭೂಮಿಯನ್ನು ಕೊಳ್ಳುವ ಮತ್ತು ಮಾರುವ ಹಾಗು ಸಂಪತ್ತನ್ನು ಶೇಖರಿಸುವ ಅಧಿಕಾರ ಕೊಟ್ಟರು. ಎಲ್ಲ ವರ್ಣದವರಿಗೆ ಶಾಸನದ ಕೆಲಸ ಮಾಡಲು ಅನುಕೂಲತೆ ದೊರಕಿಸಿಕೊಟ್ಟರು. ಎಲ್ಲ ವರ್ಣದವರಿಗೂ ಸರಿಸಮ ವೇತನ ದೊರೆಯುವ ನೀತಿಯನ್ನು ಜಾರಿಗೆ ತಂದರು. ಈಗ ನಿಜವಾದ ಅರ್ಥದಲ್ಲಿ ಮಂಡೆಲಾ ಮತ್ತು ದಕ್ಷಿಣ ಆಫ್ರಿಕೆ ಮುಕ್ತಗೊಂಡಿತು.

# ಮುಖ್ಯ ದಿನಗಳು

| | |
|---|---|
| **1918** | ಟ್ರಾಂಸ್ಕಿ, ದಕ್ಷಿಣ ಆಫ್ರಿಕಾದಲ್ಲಿ ಜನ್ಮ. |
| **1942** | ಸಾಉಥ ಆಫ್ರಿಕಾ ವಿಶ್ವವಿದ್ಯಾಲಯದಲ್ಲಿ ಕಾನೂನಿನ ಪದವಿ. |
| **1944** | ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ (ANC) ದಲ್ಲಿ ಪ್ರವೇಶ |
| **1956** | ರಾಜದ್ರೋಹದ ಆರೋಪದಿಂದಾಗಿ 155 ಜನರ ಜತೆ ಜೈಲಿಗೆ ರವಾನೆ. |
| **1958** | ನೊಜ್ಮೋ ವಿನಿಫ್ರೆಡ ಮಾದಿಕಿಜೆಲಾ ಜತೆ ವಿವಾಹ |
| **1960** | 21 ಮಾರ್ಚರಂದು ಶಾರ್ಪವ್ವಿಲ್ಲೆಯಲ್ಲಿಯ ಶಾಂತಿಯುತವಾಗಿ ವಿರೋಧ ಪ್ರದರ್ಶನೆ ಮಾಡುತ್ತಿರುವ ಜನಜಂಗುಳಿಯ ಮೇಲೆ ಗುಂಡು ಹಾರಿಸಲಾಯಿತು. ANC ಮೇಲೆ ಪ್ರತಿಬಂಧದ ಆಜ್ಞೆ. ಮಂಡೆಲಾ ಇವರ ಸಂಗಡಿಗರನ್ನು ಸೆರೆಮನೆಗೆ ಕಳುಹಿಸಲಾಯಿತು. |
| **1961** | ಮಂಡೆಲಾ ಇವರಿಂದ ಹೊಸ ಸಂಘಟನೆಯ ಸ್ಥಾಪನೆ. ಸರಕಾರಿ ಕಟ್ಟಡಗಳ ಮೇಲೆ ಬಾಂಬು ಎಸೆದ ಆಪಾದನೆ. |
| **1962** | ಮಂಡೆಲಾರಿಗೆ ಐದು ವರುಷದ ಸಶ್ರಮ ಕಾರಾವಾಸದ ಶಿಕ್ಷೆ. |
| **1964** | ಉಳಿದ ಎಂಟು ಜನರ ಜತೆ ಜೀವಾವಧಿ ಕಾರಾವಾಸದ ಶಿಕ್ಷೆ. |
| **1990** | 27 ವರುಷದ ಜೈಲುವಾಸದ ನಂತರ ಬಿಡುಗಡೆ ANC ಅಧ್ಯಕ್ಷರೆಂದು ಆಯ್ಕೆ |
| **1994** | ರಾಷ್ಟ್ರಪತಿ ಪದಕ್ಕಾಗಿ ಆಯ್ಕೆ |
| **1999** | ನೋಬೆಲ್ ಪಾರಿತೋಷಕದಿಂದ ಸನ್ಮಾನ |
| **2013** | ಮೃತ್ಯು |